ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 24 ನೇ ಮಾರ್ಚ್, 2020

ಸ್ಥಳೀಯ ಸಂಸ್ಥೆಗಳಿಗೆ 2019-2020ನೇ ಸಾಲಿನಲ್ಲಿ ನೀಡಿರುವ ಅನುದಾನ ಕುರಿತು

ಶ್ರೀ ಕಾಂತರಾಜ್(ಬಿ.ಎಂ.ಎಲ್)(ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

1531 (1807) ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) 2019-2020ನೇ ಸಾಲಿನಲ್ಲಿ ರಾಜ್ಯದ ಸ್ಥಳೀಯ ಸಂಸ್ಥೆಗಳಿಗೆ ಎಸ್.ಎಫ್.ಸಿ. ಮತ್ತು ಇತರೆ ಎಲ್ಲಾ ಹಣಕಾಸು ಯೋಜನೆಗಳಿಂದ ಬಿಡುಗಡೆ ಮಾಡಿರುವ ಅನುದಾನವೆಷ್ಟು; ಈ ಬಗ್ಗೆ ಜಿಲ್ಲಾವಾರು ಮಾಹಿತಿ ನೀಡುವುದು;

(ಆ) ಈ ಅನುದಾನವನ್ನು ಸಂಪೂರ್ಣ ಬಳಕೆ ಮಾಡಿಕೊಂಡು ವಿವಿಧ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆಯೇ ಅಥವಾ ಇಲ್ಲವೇ; ಅನುದಾನವನ್ನು ಪೂರ್ಣ ಬಳಕೆ ಮಾಡಿಕೊಳ್ಳದಿದ್ದಲ್ಲಿ, ಮಾರ್ಚ್ 2020ರ ಅಂತ್ಯಕ್ಕೆ ಎಷ್ಟು ಹಣ ಉಳಿಕೆಯಾಗಿದೆ; (ಜಿಲ್ಲಾವಾರು ಮಾಹಿತಿ ನೀಡುವುದು)

(ಇ) ತುಮಕೂರು ಜಿಲ್ಲೆಯ ಸ್ಥಳೀಯ ಸಂಸ್ಥೆಗಳು ಸದರಿ ಹಣಕಾಸು ಯೋಜನೆಗಳಿಂದ ನೀಡಿರುವ ಮೊತ್ತವೆಷ್ಟು; ಈ ಅನುದಾನವನ್ನು ಬಳಸಿಕೊಂಡು ಕೈಗೊಂಡಿರುವ ಕಾಮಗಾರಿಗಳ / ಮೂಲಭೂತ ಸೌಲಭ್ಯಗಳ ಮಾಹಿತಿಯನ್ನು ಜಿಲ್ಲೆಯ ಸಂಸ್ಥೆವಾರು ವಿವರ ಒದಗಿಸುವುದು?